KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಬುಧವಾರ, ಆಗಸ್ಟ್ ೧೧, ೨೦೧೦ (ಶ್ರಾವಣ ೨೦, ಶಕ ವರ್ಷ ೧೯೩೨) | ನಂ. ೯೧೮ |
|---|---|---|

## PERSONNEL AND ADMINISTRATIVE REFORMS SECRETARIAT

### NOTIFICATION

**No. DCA 6 ARB 2007, Bangalore, dated: 10th August, 2010**

In exercise of the powers conferred by clauses (2) and (3) of Article 166 of the Constitution of India, I, H.R.Bhardwaj, the Governor of Karnataka hereby makes the following rules further to amend the Karnataka Government (Allocation of Business) Rules, 1977, namely:-

**1. Title and Commencement:-** (1) These rules may be called the Karnataka Government (Allocation of Business) (Amendment) Rules, 2010.

(2) They shall come into force from the date of their publication in the official Gazette.

**2. Amendment of Schedule XI:-** In the Karnataka Government (Allocation of Business) Rules, 1977, (hereinafter referred to as the said rules) in SCHEDULE XI under the heading ``Department of Parliamentary Affairs and Legislation`` under the sub-heading ``BB. Translation`` for serial number 2 and entries relating thereto the following shall be substituted namely:-

"**2.** Constitution and reconstitution of the Official Language (Legislative) Expert Committee by amending the Karnataka Official Language Act, 1963."

**GOVERNOR OF KARNATAKA**

By Order and in the name of the Governor of Karnataka,
**P. MARKANDEYA**
Under Secretary to Government
Department of Personnel and Administrative Reforms
(Service Rules-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಸಿಎ 6 ಎಆರ್‌ಬಿ 2007, ಬೆಂಗಳೂರು, ದಿನಾಂಕ: 10ನೇ ಆಗಸ್ಟ್, 2010**

ಭಾರತದ ಸಂವಿಧಾನದ 166 ನೇ ಅನುಚ್ಛೇದದ ಕಲಮು (2) ಮತ್ತು (3) ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಾನು, ಹೆಚ್.ಆರ್.ಭಾರದ್ವಾಜ್, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು, 1977, ಇದಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕೆಳಕಂಡ ನಿಯಮಗಳನ್ನು ಈ ಮೂಲಕ ರಚಿಸಿದ್ದೇನೆ, ಎಂದರೆ:–

**1. ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) (ತಿದ್ದುಪಡಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಣೆ ಮಾಡಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ XI ಕ್ಕೆ ತಿದ್ದುಪಡಿ:–** 1977 ರ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳಲ್ಲಿ (ಇನ್ನು ಮುಂದೆ ಸದರಿ ನಿಯಮಗಳೆಂದು ಕರೆಯಲಾಗುವ), XI ರ ಅನುಸೂಚಿಯಲ್ಲಿ "ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ" ಶೀರ್ಷಿಕೆಯಡಿ "ಬಿಬಿ. ಭಾಷಾಂತರ" ಉಪ ಶೀರ್ಷಿಕೆಯಡಿ, ಕ್ರಮ ಸಂಖ್ಯೆ 2 ಮತ್ತು ಅದರಡಿಯಲ್ಲಿನ ನಮೂದುಗಳ ಬದಲಾಗಿ, ಈ ಕೆಳಕಂಡಂತೆ ಪ್ರತಿಸ್ಥಾಪಿಸತಕ್ಕದ್ದು:–

"**2.** ಕರ್ನಾಟಕ ರಾಜಭಾಷಾ ವಿಧೇಯಕ, 1963 ನ್ನು ತಿದ್ದುಪಡಿ ಮಾಡಿ ರಾಜಭಾಷಾ ವಿಧಾಯಿ ಆಯೋಗದ ರಚನೆ ಮತ್ತು ಪುನರ್ ರಚನೆ ಮಾಡಲು".

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2)

**ವಿ.ಸೂ:** ಇದು ದಿನಾಂಕ 10.08.2010ರ ಅಧಿಸೂಚನೆ ಸಂಖ್ಯೆ: ಡಿಸಿಎ 6 ಎಆರ್‌ಬಿ 2007ರ ಕನ್ನಡ ಅನುವಾದವಾಗಿದೆ.

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಆಗಸ್ಟ್ ೧೨, ೨೦೧೦ (ಶ್ರಾವಣ ೨೧, ಶಕ ವರ್ಷ ೧೯೩೨) | ನಂ. ೯೧೯ |
|---|---|---|

**ಕರ್ನಾಟಕ ಸರ್ಕಾರದ ನಡೆವಳಿಗಳು**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಸಾದಿಲ್ವಾರು ವೆಚ್ಚದಲ್ಲಿ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ನಿವೃತ್ತಿ ವಯಸ್ಸನ್ನು 60 ವರ್ಷಗಳಿಗೆ ಹೆಚ್ಚಿಸುವ ಬಗ್ಗೆ.

**ಆದೇಶ ಸಂಖ್ಯೆ: ಸಿಆಸುಇ 4 ಸೇನಿಸಿ 2010, ಬೆಂಗಳೂರು, ದಿನಾಂಕ: 11ನೇ ಆಗಸ್ಟ್, 2010**

**ಓದಲಾಗಿದೆ :**

1. ದಿನಾಂಕ 31.07.1985ರ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 18 ಎಸ್‌ಡಿಇ 85
2. ಆದೇಶ ಸಂಖ್ಯೆ: ಸಿಆಸುಇ 44ಸೇನಿಸಿ 2008, ದಿನಾಂಕ 28.07.2008.

**ಪ್ರಸ್ತಾವನೆ:**

ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು ದಿನಾಂಕ 18.07.2008ರಿಂದ ಜಾರಿಗೆ ಬರುವಂತೆ 58 ರಿಂದ 60ವರ್ಷಗಳಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 28.07.2008ರ ಆದೇಶದಲ್ಲಿ ಹೆಚ್ಚಿಸಲಾಗಿದೆ ಈ ಹಿಂದೆ 1984ರಲ್ಲಿ ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು 55 ರಿಂದ 58 ವರ್ಷಗಳಿಗೆ ಹೆಚ್ಚಿಸಲಾಗಿದ್ದ ಸಂದರ್ಭದಲ್ಲಿ ಉಲ್ಲೇಖ(1)ರಲ್ಲಿ ಓದಲಾದ ದಿನಾಂಕ 31.07.1985ರ ಅಧಿಕೃತ ಜ್ಞಾಪನದಲ್ಲಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ನಿವೃತ್ತಿಯ ವಯಸ್ಸನ್ನು 55 ರಿಂದ 58 ವರ್ಷಕ್ಕೆ ಹೆಚ್ಚಿಸಲಾಗಿತ್ತು.

ಸರ್ಕಾರಿ ನೌಕರರ ನಿವೃತ್ತಿಯ ವಯಸ್ಸನ್ನು ಮೇಲೆ ತಿಳಿಸಿರುವಂತೆ 58 ರಿಂದ 60 ವರ್ಷಗಳಿಗೆ ಹೆಚ್ಚಿಸಿರುವ ಸನ್ನಿವೇಶದಲ್ಲಿ ಸಾದಿಲ್ವಾರು ವೆಚ್ಚದಲ್ಲಿ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ನಿವೃತ್ತಿ ವಯಸ್ಸನ್ನು 58 ವರ್ಷದಿಂದ 60 ವರ್ಷದವರೆಗೆ ಹೆಚ್ಚಿಸಲು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆದು ಕಾರ್ಯನಿರ್ವಹಿಸುತ್ತಿರುವ ಪೂರ್ಣಕಾಲಿಕ ನೌಕರರ ನಿವೃತ್ತಿ ವಯಸ್ಸನ್ನು ತಕ್ಷಣದಿಂದ ಜಾರಿಗೆ ಬರುವಂತೆ 58 ರಿಂದ 60 ವರ್ಷಕ್ಕೆ ಹೆಚ್ಚಿಸಲಾಗಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 257 ಸೇ-3/10 ದಿನಾಂಕ 02.03.2010ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-2)

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಶುಕ್ರವಾರ, ಆಗಸ್ಟ್ ೧೩, ೨೦೧೦ (ಶ್ರಾವಣ ೨೨, ಶಕ ವರ್ಷ ೧೯೩೨) | ನಂ. ೯೨೨ |
|---|---|---|

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

## ಪ್ರಕಟಣೆ

**ಸಂಖ್ಯೆ: ಲೋಇ 49 ಇಎಪಿ 2008, ಬೆಂಗಳೂರು, ದಿನಾಂಕ: 13ನೇ ಆಗಸ್ಟ್, 2010**

**ವಿಷಯ:** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ – 2ರ ಅನುಷ್ಠಾನಕ್ಕೆಂದು ಕರ್ನಾಟಕ ಹೆದ್ದಾರಿ ಅಧಿನಿಯಮ 1964ರ ಅಡಿಯಲ್ಲಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಇವರನ್ನು ಹೆದ್ದಾರಿ ಪ್ರಾಧಿಕಾರಿಯೆಂದು (ಹೈವೇ ಅಥಾರಿಟಿ) ನೇಮಿಸುವ ಬಗ್ಗೆ.

**ಉಲ್ಲೇಖ :** ಕರ್ನಾಟಕ ರಾಜ್ಯಪತ್ರದ ಪ್ರಕಟಣೆ ಸಂಖ್ಯೆ

1. ಪಿ.ಡಬ್ಲ್ಯು.ಡಿ:49:ಇಎಪಿ:2008, ದಿನಾಂಕ: 2.12.2008.
2. ಪಿ.ಡಬ್ಲ್ಯು.ಡಿ:49:ಇಎಪಿ:2008, ದಿನಾಂಕ: 17.12.2008.
3. ಪಿ.ಡಬ್ಲ್ಯು.ಡಿ:49:ಇಎಪಿ:2008, ದಿನಾಂಕ: 21.5.2010.

ಉಲ್ಲೇಖಿತ ದಿನಾಂಕ: 2.12.2008ರ ಕರ್ನಾಟಕ ರಾಜ್ಯ ವಿಶೇಷ ಪತ್ರದಲ್ಲಿನ ಪ್ರಕಟಣೆಯಲ್ಲಿ 22 ರಾಜ್ಯ ಹೆದ್ದಾರಿಗಳ ಒಟ್ಟು 1441.86 ಕಿ.ಮೀ. ಉಲ್ಲೇಖಿತ ದಿನಾಂಕ: 17.12.2008ರ ಕರ್ನಾಟಕ ರಾಜ್ಯ ವಿಶೇಷ ಪತ್ರದಲ್ಲಿನ ಪ್ರಕಟಣೆಯಲ್ಲಿ 3 ರಾಜ್ಯ ಹೆದ್ದಾರಿಗಳ ಒಟ್ಟು 170.80 ಕಿ.ಮೀ. ಹಾಗೂ ದಿನಾಂಕ: 21.5.2010ರ ಕರ್ನಾಟಕ ರಾಜ್ಯ ವಿಶೇಷ ಪತ್ರದಲ್ಲಿನ ಪ್ರಕಟಣೆಯಲ್ಲಿ 7 ರಾಜ್ಯ ಹೆದ್ದಾರಿಗಳ ಒಟ್ಟು 402.00 ಕಿ.ಮೀ.ಗಳಿಗೆ ವಿಶ್ವಬ್ಯಾಂಕ್ ಹಾಗೂ ಏಷಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನಡಿ ಅಭಿವೃದ್ಧಿಪಡಿಸಲು ಉದ್ದೇಶಿಸಿರುವ ಒಟ್ಟು 2014.66 ಕಿ.ಮೀ. ಉದ್ದದ ರಸ್ತೆಗಳಿಗೆ, ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಇವರನ್ನು ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಪ್ರಕರಣ-4ರಡಿ ತಾತ್ಕಾಲಿಕವಾಗಿ "ಹೆದ್ದಾರಿ ಪ್ರಾಧಿಕಾರಿ" ಎಂದು ಸದರಿ ಕಾಮಗಾರಿಗಳು ಪೂರ್ಣಗೊಂಡು ಸಂಬಂಧಪಟ್ಟ ವಿಭಾಗದ ಕಾರ್ಯಪಾಲಕ ಇಂಜಿನಿಯರುಗಳಿಗೆ ಮರು ಹಸ್ತಾಂತರವಾಗುವವರೆಗೆ ನೇಮಿಸಲಾಗಿರುತ್ತದೆ.

ಈಗ ಸರ್ಕಾರವು ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ-2ರ ಹಂತ-1ರಡಿ ಏಷಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನಡಿ ಈ ಕೆಳಕಂಡ ರಸ್ತೆಯನ್ನು ಅಭಿವೃದ್ಧಿ ಪಡಿಸಲು ಉದ್ದೇಶಿಸಲಾಗಿದೆ.

| ಕ್ರ. ಸಂ. | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಯ ವಿಭಾಗದ ವಿವರ |
|---|---|---|
| 1. | 64 | ಪಾವಗಡದಿಂದ ಆಂಧ್ರಪ್ರದೇಶ ಗಡಿಯವರೆಗೆ ಸರಪಳಿ ಕಿ.ಮೀ. 237.00 ರಿಂದ 262.9 ಕಿ.ಮೀ ವರೆಗೆ |

ಮುಂದುವರೆದು, ಅಭಿವೃದ್ಧಿ ಪಡಿಸಲು ಉದ್ದೇಶಿಸಿರುವ ಸದರಿ ರಾಜ್ಯ ಹೆದ್ದಾರಿ ಸರಪಳಿಯ ಭಾಗಗಳಿಗೂ ಸಹ ಅನ್ವಯಿಸುವಂತೆ, ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಇವರನ್ನು ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಪ್ರಕರಣ-4ರಡಿ ತಾತ್ಕಾಲಿಕವಾಗಿ "ಹೆದ್ದಾರಿ ಪ್ರಾಧಿಕಾರಿ" ಎಂದು ಸದರಿ ಕಾಮಗಾರಿಗಳು ಪೂರ್ಣಗೊಂಡು ಸಂಬಂಧಪಟ್ಟ ಲೋಕೋಪಯೋಗಿ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಮರು ಹಸ್ತಾಂತರವಾಗುವವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೬, ೨೦೧೦ (ಶ್ರಾವಣ ೨೫, ಶಕ ವರ್ಷ ೧೯೩೨) | ನಂ. ೯೨೩ |
|---|---|---|

**PROCEEDINGS OF THE GOVERNMENT OF KARNATAKA**

**HOME SECRETARIAT**

**Sub :** Authentication/attestation of original documents – delegation of powers to the Additional Deputy Commissioner & Additional District Magistrate, Bangalore Urban and Additional Deputy Commissioner & Additional District Magistrate, Bangalore Rural – reg.

**READ**:

1) Government Order No. HD 374 PMS 2008, dated 12.08.2009
2) Corrigendum of even No. dated 22.08.2009.
3) Government Order No. HD 376 PMS 2010, dated 21.07.2010
4) Letter No. RC/BDC/CR/1/10-11 dated 04.08.2010 from the Regional Commissioner, Bangalore

**PREAMBLE:**

In Government Order HD 374 PMS 2008, dated 12.08.2009 read with corrigendum dated 22.08.2009 cited at(1 & 2) above, among others, the Regional Commissioner, Bangalore and Additional Commissioner(Administration & Development), Bangalore region have been also authorized to attest / authenticate the documents issued in the Bangalore revenue region in addition to the Joint Secretary to Government, Home Dept(Police Services) and the Under Secretary to Government, Home Dept(Passport and Foreigners), at Government level w.e.f 01.09.2009. Further, in order to avoid inconvenience caused to the candidates and for the better & speedy disposal of attestation of documents, powers have been delegated to the Regional Commissioner, Bangalore,Additional Commissioner(Administration & Development) Bangalore and Additional Commissioner(Land Maintenance Projects & Misc), Bangalore to attest the original documents relating to Bangalore revenue region in Government Order read at (3 ) above. As per the Government Order read at (3) above, the applications for attestation of original documents relating to Bangalore Revenue Region received in Home Department prior to 21.07.2010 are being processed and disposed off in Home Department itself and no applications in this regard are received in Home Department w.e.f. 21.07.2010, since the entire work of attestation of original documents relating to Bangalore Revenue Region has been entrusted to the Regional Commissioner, Bangalore, Additional Commissioner(Administration & Development) Bangalore, and Additional Commissioner(Land Maintenance Projects & Misc), Bangalore.

However, in his letter read at (4) above, the Regional Commissioner, Bangalore Division Bangalore has stated that consequent on issue of Government Order read at (3) above, the entire work relating to attestation of original documents relating to Bangalore Revenue Region is being done in his office and the number of applications received for attestation of documents relating to this Region has increased as a result of which the regular work in his office is getting affected. Therefore, in order to ease such pressure and to make it convenient to general public he has suggested to authorize the Additional Deputy Commissioner & Additional District Magistrate, Bangalore Urban and Additional Deputy Commissioner & Additional District Magistrate, Bangalore Rural to attest /authenticate the original documents relating to Bangalore Revenue Region along with the Regional Commissioner and Additional Commissioner (Administration & Development) Bangalore and Additional Commissioner(Land Maintenance Projects & Misc), Bangalore. The Government has examined the proposal of the Regional Commissioner, Bangalore . Hence this order.

**GOVERNMENT ORDER NO. HD 376 PMS 2010, BANGALORE, DATED 13th August, 2010**

In the circumstances explained in the preamble and in partial modification of the Government Order dated 12.08.2009 read with corrigendum dated 22.08.2009 and Government Order dated 21.07.2010 read at (1 to 3) above, Government is pleased to further delegate the powers to the Additional Deputy Commissioner & Additional District Magistrate,

Bangalore Urban and Additional Deputy Commissioner & Additional District Magistrate, Bangalore Rural to attest / authenticate the original documents pertaining to the Bangalore revenue region, along with the Regional Commissioner, Bangalore, Additional Commissioner (Administration & Development) Bangalore and Additional Commissioner(Land Maintenance Projects & Misc), Bangalore. They shall attest the original documents pertaining to the Bangalore revenue region strictly as per the instructions contained in Government Order read at (1) above.

The Additional Deputy Commissioner & Additional District Magistrate, Bangalore Urban and Additional Deputy Commissioner & Additional District Magistrate, Bangalore Rural shall forward their specimen signatures, in triplicate, in original, in the format prescribed at Annexure-I to the Under Secretary, Home Department, Government of Karnataka for circulation among the Ministry of External Affairs, Consulates, Embassies and others.

This order comes into force with immediate effect.

By order and in the Name of the Governor of Karnataka,
**ALICE GONSALVES**
Under Secretary to Government
Home Department,
[Passport and Foreigners]

# ವಿಶೇಷ ಪತ್ರಿಕೆ



| ಭಾಗ – I | ಬೆಂಗಳೂರು, ಸೋಮವಾರ, ಆಗಸ್ಟ್ ೧೬, ೨೦೧೦ (ಶ್ರಾವಣ ೨೫, ಶಕ ವರ್ಷ ೧೯೩೨) | ನಂ. ೯೨೪ |
|---|---|---|



## ಕರ್ನಾಟಕ ಸರ್ಕಾರದ ನಡವಳಿಗಳು

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಖನಿಜಗಳನ್ನು ಶೇಖರಿಸಲು ಅದಿರು ದಾಸ್ತಾನು ಪ್ರಾಂಗಣ (Stockyard)ಗಳನ್ನು ಸ್ಥಾಪಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ:ಸಿಐ.31:ಎಂಎಂಎಂ.2005 ದಿನಾಂಕ:21.09.2005.

2) ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ:ಗಭೂಇ.ಗಗುಶಾ.ದಾಸ್ತಾನು ಮಳಿಗೆ:2009–10:5885, ದಿನಾಂಕ:29.03.2010.

**ಪ್ರಸ್ತಾವನೆ:**

ಕಬ್ಬಿಣದ ಅದಿರನ್ನು ಕ್ರಷಿಂಗ್ ಮತ್ತು ಸ್ಕ್ರೀನಿಂಗ್ ಮಾಡುವ ಸಲುವಾಗಿ ಅದಿರನ್ನು ಶೇಖರಿಸಲು ಅದಿರು ದಾಸ್ತಾನು ಪ್ರಾಂಗಣ (Stockyard)ಗಳನ್ನು ಸ್ಥಾಪಿಸಲು ಅನುಮತಿಯನ್ನು ನೀಡುವಂತೆ ಹಲವಾರು ಸಂಸ್ಥೆಗಳು: ಮಾರಾಟಗಾರರು ಕೋರುತ್ತಿರುವುದಾಗಿ ತಿಳಿಸುತ್ತಾ, ಈ ಬಗ್ಗೆ ಸರ್ಕಾರದ ಅನುಮತಿಯನ್ನು ನೀಡುವಂತೆ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ತಮ್ಮ ಪತ್ರ ದಿನಾಂಕ:17.02.2005 ಮತ್ತು 15.04.2005ರಲ್ಲಿ ಕೋರಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಆಧರಿಸಿ, ಖನಿಜಗಳನ್ನು ಮಾರಾಟ ಮಾಡಲು:ಖರೀದಿಸಲು: ಸಂಸ್ಕರಿಸಲು ಮತ್ತು ಸಾಗಾಣಿಕೆ ಮಾಡಲು ಅದಿರು ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು ಕೆಲವೊಂದು ಷರತ್ತುಗಳಿಗೊಳಪಡಿಸಿ, ಮೇಲೆ ಓದಲಾದ(1)ರ ಸರ್ಕಾರೀ ಆದೇಶದಲ್ಲಿ ಅನುಮತಿಯನ್ನು ನೀಡಲಾಗಿರುತ್ತದೆ.

ಗಣಿಗುತ್ತಿಗೆದಾರರನ್ನು ಹೊರತುಪಡಿಸಿ, ಟ್ರೇಡರ್ ಮತ್ತು ಇತರರೂ ಸಹ ಸ್ಟಾಕ್‌ಯಾರ್ಡ್‌ನ್ನು ಸ್ಥಾಪಿಸಲು ಅವಕಾಶವಿರುವುದರಿಂದ, ಬೇರೆ ಮೂಲಗಳಿಂದ ಖನಿಜಗಳನ್ನು ಅನಧಿಕೃತವಾಗಿ ಪಡೆದು, ಅದಿರು ಸಂಗ್ರಹಣೆಗೆ ಕಾರಣವಾಗಿರುತ್ತದೆಂದು ಹಾಗೂ ಮಾನ್ಯ ಲೋಕಾಯುಕ್ತರು ದಿನಾಂಕ:18.12.2008ರಂದು ಸರ್ಕಾರಕ್ಕೆ ನೀಡಿರುವ ತಮ್ಮ ತನಿಖಾ ವರದಿಯಲ್ಲಿ, ದಾಸ್ತಾನು ಮಳಿಗೆಗಳ ಅಕ್ರಮ ಚಟುವಟಿಕೆಗಳ ಬಗ್ಗೆ ವರದಿ ಮಾಡುತ್ತಾ, ಈ ಬಗ್ಗೆ ಕ್ರಮ ತೆಗೆದುಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆಂದು ತಿಳಿಸುತ್ತಾ, ಈಗಿರುವ ವ್ಯವಸ್ಥೆಯ ಬದಲು ಗುತ್ತಿಗೆದಾರರಿಗೆ ಮಾತ್ರ ದಾಸ್ತಾನು ಮಳಿಗೆಗಳಿಗೆ ನೊಂದಣಿಗೆ ಅವಕಾಶ ಕಲ್ಪಿಸಿದಲ್ಲಿ, ಸ್ಟಾಕ್‌ಯಾರ್ಡ್‌ಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿ ಗಣಿ ಚಟುವಟಿಕೆಗಳ ಮೇಲೆ ಪರಿಣಾಮಕಾರಿ ನಿಗಾ ವಹಿಸಬಹುದಾಗಿರುತ್ತದೆಂದು ಹಾಗೂ ಒಂದು ವೇಳೆ, ಅಕ್ರಮ

ಚಟುವಟಿಕೆಯಲ್ಲಿ ತೊಡಗಿದ್ದು ಕಂಡುಬಂದರೆ, ಅಂತಹ ತಪ್ಪಿತಸ್ಥ ಗುತ್ತಿಗೆದಾರರ ವಿರುದ್ಧ, ಎಂ.ಎಂ.(ಡಿ&ಆರ್)ಕಾಯ್ದೆ, 1957 ಮತ್ತು ಖನಿಜ ರಿಯಾಯಿತಿ ನಿಯಮಾವಳಿ, 1960ರನ್ವಯ ಕ್ರಮ ಜರುಗಿಸಬಹುದಾಗಿರುತ್ತದೆ ಎಂದು ವರದಿ ಮಾಡುತ್ತಾ, ಒಬ್ಬ ಗುತ್ತಿಗೆದಾರರಿಗೆ ಒಂದು ಸ್ಥಳಕ್ಕೆ ಒಂದು ಅದಿರು ದಾಸ್ತಾನು ಪ್ರಾಂಗಣವನ್ನು ಸ್ಥಾಪಿಸಲು ಅವಕಾಶ ನೀಡುವುದು ಸೂಕ್ತವಾಗಿರುವುದರಿಂದ, ದಿನಾಂಕ:21.09.2005ರ ಸರ್ಕಾರೀ ಆದೇಶವನ್ನು ಪರಿಷ್ಕರಿಸುವಂತೆ ಮೇಲೆ ಓದಲಾದ(2)ರ ಪತ್ರದಲ್ಲಿ ನಿರ್ದೇಶಕರು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ದಿನಾಂಕ:21.09.2005ರ ಸರ್ಕಾರೀ ಆದೇಶ ಸಂಖ್ಯೆ:ಸಿಐ.31:ಎಂಎಂಎಂ.2005ನ್ನು ಹಿಂದಕ್ಕೆ ಪಡೆದು, ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು ಅನುಮತಿ ನೀಡುವ ಬಗ್ಗೆ ಪರಿಷ್ಕೃತ ಮಾರ್ಗದರ್ಶನಗಳನ್ನು ನೀಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶ:–

**ಸರ್ಕಾರದ ಆದೇಶ ಸಂಖ್ಯೆ: ಸಿಐ.113:ಎಂಎಂಎಂ.2010(ಭಾಗ), ಬೆಂಗಳೂರು, ದಿನಾಂಕ: 13ನೇ ಆಗಸ್ಟ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಖನಿಜಗಳ ಶೇಖರಣೆಗಾಗಿ ಅದಿರು ದಾಸ್ತಾನು ಪ್ರಾಂಗಣ (Stockyard)ಗಳನ್ನು ಸ್ಥಾಪಿಸಲು ಅನುಮತಿ ನೀಡಿರುವ ಸರ್ಕಾರದ ಆದೇಶ ಸಂಖ್ಯೆ:ಸಿಐ.31: ಎಂಎಂಎಂ.2005 ದಿನಾಂಕ:21.09.2005ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆದು, ಖನಿಜಗಳ ಶೇಖರಣೆಗಾಗಿ, ಗಣಿಗುತ್ತಿಗೆದಾರರು ಹಾಗೂ ಅದಿರು ಸಂಸ್ಕರಣಾ ಘಟಕಗಳನ್ನು ಹೊಂದಿರುವ ನೈಜ ಖಾಸಗಿ ಉದ್ದಿಮೆದಾರರಿಗೆ ಮಾತ್ರ ಅದಿರು ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಅನುಮತಿ ನೀಡಲು ಆದೇಶಿಸಿದೆ:–

(i) ಅದಿರು ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು ಅನುಮತಿ ಪಡೆಯಲು ರೂ.1000/–ರಂತೆ ನೊಂದಣಿ ಶುಲ್ಕ ಪಾವತಿಸತಕ್ಕದ್ದು;

(ii) ಗಣಿಗುತ್ತಿಗೆದಾರರಲ್ಲದ, ಅದಿರು ಸಂಸ್ಕರಣಾ ಘಟಕಗಳನ್ನು ಹೊಂದಿದ ಪ್ರಕರಣಗಳಲ್ಲಿ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಸ್ವತ: ಸ್ಥಳ ಪರಿಶೀಲನೆ ನಡೆಸಿ, ಅದಿರು ಸಂಸ್ಕರಣೆಗೆ ಬೇಕಾದ ಎಲ್ಲಾ ಮೂಲಭೂತ ಸೌಕರ್ಯ ಹೊಂದಿರುವ ಬಗ್ಗೆ ಖಚಿತವಾದಾಗ ಮಾತ್ರ, ಅಂತಹ ಘಟಕಗಳಿಗೆ:ಉದ್ದಿಮೆದಾರರಿಗೆ ಅದಿರು ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು ಅನುಮತಿಸತಕ್ಕದ್ದು;

(iii) ಅದಿರು ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿ ಪತ್ರವನ್ನು ದಾಸ್ತಾನು ಪ್ರಾಂಗಣ ಅರ್ಜಿದಾರರು ಕಡ್ಡಾಯವಾಗಿ ಪಡೆಯತಕ್ಕದ್ದು;

(iv) ಅದಿರು ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳಿಂದ ಭೂಪರಿವರ್ತನೆಯ ಆದೇಶವನ್ನು ಕಡ್ಡಾಯವಾಗಿ ಪಡೆಯ ತಕ್ಕದ್ದು;

(v) ಉದ್ದಿಮೆದಾರರಿಂದ ಅದಿರು ಸಂಸ್ಕರಣಾ ಘಟಕ ಹೊಂದಿರುವ ಬಗ್ಗೆ ಸಂಬಂಧಪಟ್ಟ ಜಿಲ್ಲೆಯ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಿಂದ ದೃಢೀಕೃತ ಪತ್ರವನ್ನು ಪಡೆಯತಕ್ಕದ್ದು;

(vi) ಒಬ್ಬ ಗುತ್ತಿಗೆದಾರರಿಗೆ:ಅದಿರು ಸಂಸ್ಕರಣಾ ಘಟಕ ಹೊಂದಿರುವವರಿಗೆ ಒಂದು ಅದಿರು ದಾಸ್ತಾನು ಪ್ರಾಂಗಣವನ್ನು ಮಾತ್ರ ನೀಡುವುದಕ್ಕೆ ಸೀಮಿತಗೊಳಿಸತಕ್ಕದ್ದು;

(vii) ಆದಾಯ ತೆರಿಗೆ ತೀರುವಳಿ ಪ್ರಮಾಣ ಪತ್ರ ಮತ್ತು ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಅರ್ಜಿದಾರರು ಕಡ್ಡಾಯವಾಗಿ ಸಲ್ಲಿಸತಕ್ಕದ್ದು;

(viii) ಗುತ್ತಿಗೆದಾರರು:ಅದಿರು ಸಂಸ್ಕರಣಾ ಘಟಕ ಹೊಂದಿರುವವರು ತಾವು ಯಾವುದೇ ಅನಧಿಕೃತ ಗಣಿಗಾರಿಕೆ, ಸಾಗಾಣಿಕೆಯಲ್ಲಿ ತೊಡಗಿರುವುದಿಲ್ಲ ವೆಂದು ಮತ್ತು ಈ ಕಾರಣಕ್ಕಾಗಿ ಶಿಕ್ಷೆಗೆ ಒಳಗಾಗಿರುವುದಿಲ್ಲವೆಂದು ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು;

(ix) ಅದಿರು ದಾಸ್ತಾನು ಪ್ರಾಂಗಣಗಳಿಗೆ ಐದು ವರ್ಷದ ಅವಧಿಗೆ ಮಾತ್ರ ಅನುಮತಿಯನ್ನು ನೀಡತಕ್ಕದ್ದು. ನಂತರ, ಆಗಿಂದಾಗ್ಯೆ ಇದನ್ನು ನವೀಕರಿಸಿ ಕೊಳ್ಳತಕ್ಕದ್ದು.

ಅದಿರು ದಾಸ್ತಾನು ಪ್ರಾಂಗಣಗಳನ್ನು ಹೊಂದಿರುವವರು ಯಾವುದೇ ನಿಯಮಗಳನ್ನು ಉಲ್ಲಂಘನೆ ಮಾಡಿದಲ್ಲಿ, ಅಂತಹ ಪ್ರಕರಣಗಳಲ್ಲಿ ಅದಿರು ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು ನೀಡಿರುವ ಅನುಮತಿಯನ್ನು ಕೂಡಲೇ ರದ್ದುಪಡಿಸತಕ್ಕದ್ದು.

ಅದಿರು ದಾಸ್ತಾನು ಪ್ರಾಂಗಣಗಳನ್ನು ಹೊಂದಿರುವವರು ದಾಸ್ತಾನು ಪ್ರಾಂಗಣಗಳಲ್ಲಿ ಇರುವ ಅದಿರಿನ ದಾಸ್ತಾನು, ಅದನ್ನು ಪಡೆದ ಮೂಲಗಳ ಬಗ್ಗೆ ವಿವರಗಳು, ಖನಿಜಗಳನ್ನು ಸಾಗಿಸಿರುವ ಸ್ಥಳಗಳ ವಿವರಗಳು ಮತ್ತು ರಾಜಧನವನ್ನು ಪಾವತಿಸಿರುವ ಬಗ್ಗೆ ವಿವರಗಳನ್ನೊಳಗೊಂಡಂತೆ ತ್ರೈಮಾಸಿಕ ವರದಿಯನ್ನು ಸಂಬಂಧಪಟ್ಟ ಜಿಲ್ಲೆಯ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಉಪನಿರ್ದೇಶಕರು:ಹಿರಿಯ ಭೂವಿಜ್ಞಾನಿ ಇವರಿಗೆ ಸಲ್ಲಿಸತಕ್ಕದ್ದು.

ದಿನಾಂಕ:21.09.2005ರ ಸರ್ಕಾರೀ ಆದೇಶವನ್ನು ಆಧರಿಸಿ, ಗಣಿಗುತ್ತಿಗೆದಾರರು ಹಾಗೂ ಅದಿರು ಸಂಸ್ಕರಣಾ ಘಟಕ ಹೊಂದಿರುವ ನೈಜ ಖಾಸಗಿ ಉದ್ದಿಮೆದಾರರಿಗೆ ಅದಿರು ದಾಸ್ತಾನು ಪ್ರಾಂಗಣಗಳ ಸ್ಥಾಪನೆಗಾಗಿ ನೀಡಿರುವ ಅನುಮತಿಗಳನ್ನು ಹೊರತುಪಡಿಸಿ, ಉಳಿದ ಮಾರಾಟಗಾರರಿಗೆ ಹಾಗೂ ಇತರರಿಗೆ ನೀಡಿರುವ ಅದಿರು ದಾಸ್ತಾನು ಪ್ರಾಂಗಣಗಳ ಅನುಮತಿಯನ್ನು ತಕ್ಷಣವೇ ರದ್ದುಪಡಿಸಲು ಕ್ರಮ ಕೈಗೊಳ್ಳುವಂತೆ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರಿಗೆ ಸೂಚಿಸಿದೆ.

ಹೊಸದಾಗಿ ಅದಿರು ದಾಸ್ತಾನು ಪ್ರಾಂಗಣಗಳನ್ನು ಸ್ಥಾಪಿಸಲು ಅನುಮತಿಯನ್ನು ಪಡೆಯಲು:ನವೀಕರಣಕ್ಕಾಗಿ ಸಲ್ಲಿಸಬೇಕಾಗಿರುವ ಅರ್ಜಿಗಳ ನಮೂನೆ ಮತ್ತು ಪ್ರಾಂಗಣದಾರರು ತ್ರೈಮಾಸಿಕ ವರದಿಯನ್ನು ಸಲ್ಲಿಸಲು ನಿಗದಿತ ನಮೂನೆಯನ್ನು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಸಿದ್ಧಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎ.ಅಡಗಟ್ಟಿ**
ಸರ್ಕಾರದ ಜಂಟಿ ಕಾರ್ಯದರ್ಶಿ(ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ಪತ್ರಿಕೆ


| | | |
|---|---|---|
| **ಭಾಗ – III** | **ಬೆಂಗಳೂರು, ಸೋಮವಾರ, ಆಗಸ್ಟ್ ೧೬, ೨೦೧೦ (ಶ್ರಾವಣ ೨೫, ಶಕ ವರ್ಷ ೧೯೩೨)** | **ನಂ. ೯೨೫** |


## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

**ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ಕಟ್ಟಡ (ಹಿಂಭಾಗ) 1ನೇ ಮಹಡಿ, ನಂ.8, ಕನ್ನಿಂಗ್ ಹ್ಯಾಂ ರಸ್ತೆ. ಬೆಂಗಳೂರು–560052**

**ಆದೇಶ**

**ಸಂಖ್ಯೆ ರಾಚುಆ.224.ಇಯುಬಿ.2010 ಬೆಂಗಳೂರು ದಿನಾಂಕ: 12–08–2010**

ರಾಜ್ಯ ಚುನಾವಣಾ ಆಯೋಗವು ಈ ಆದೇಶದ ಅನುಬಂಧದಲ್ಲಿರುವ ನಗರ ಸ್ಥಳೀಯ ಸಂಸ್ಥೆಗಳ ವಾರ್ಡುಗಳಲ್ಲಿ ತೆರವಾಗಿರುವ ಸದಸ್ಯ ಸ್ಥಾನಗಳಿಗೆ ಈ ಕೆಳಗೆ ನಮೂದಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಉಪಚುನಾವಣೆಯನ್ನು ನಡೆಸಲು ಆದೇಶಿಸಿದೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಜಿಲ್ಲಾಧಿಕಾರಿಗಳು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | 06–09–2010 (ಸೋಮವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 13–09–2010 (ಸೋಮವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 14–09–2010 (ಮಂಗಳವಾರ) |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 16–09–2010 (ಗುರುವಾರ) |

| | | |
|---|---|---|
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸ ಬೇಕಾದ ದಿನಾಂಕ ಮತ್ತು ದಿನ | 26–09–2010 (ಭಾನುವಾರ) |
| 6 | ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 26–09–2010 ಭಾನುವಾರ |
| 7 | ಮತಗಳ ಎಣಿಕೆಯು ಬೆಳಿಗ್ಗೆ 8.00 ಘಂಟೆಯಿಂದ | 28–09–2010 ಮಂಗಳವಾರ |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 29–09–2010 ಬುಧವಾರ |

ಜಿಲ್ಲಾಧಿಕಾರಿಯವರು ಆಯೋಗವು ಆದೇಶಿಸಿದ ಚುನಾವಣಾ ವೇಳಾ ಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ ನಡೆಸುವ) ನಿಯಮ 1979 ರ ನಿಯಮ 10 ಮತ್ತು ಕರ್ನಾಟಕ ಮುನಿಸಿಪಾಲಿಟಿ (ಎಲೆಕ್ಷನ್ ಆಫ್ ಕೌನ್ಸಿಲರ್ಸ್) ನಿಯಮಗಳು 1977 ರ ನಿಯಮ 8 ರ ಪ್ರಕಾರ ಅಧಿಸೂಚನೆಯನ್ನು ಹೊರಡಿಸತಕ್ಕದ್ದು. ಹಾಗೆ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯ ಪ್ರತಿಗಳನ್ನು ಜಿಲ್ಲಾಧಿಕಾರಿ ಕಛೇರಿ, ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಕಛೇರಿ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲಿಯೂ ಸಹಾ ಪ್ರದರ್ಶಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ–1ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು. ಚುನಾವಣಾಧಿಕಾರಿ/ ಸಹಾಯಕ ಚುನಾವಣಾಧಿಕಾರಿಗಳನ್ನು ನೇಮಿಸಿ ನೇಮಕಾತಿ ಆದೇಶವನ್ನು ಆಯೋಗಕ್ಕೆ ಕಳುಹಿಸುವುದು.

ಸದಾಚಾರ ಸಂಹಿತೆಯು ರಾಜ್ಯ ಚುನಾವಣಾ ಆಯೋಗವು ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸುವ ದಿನಾಂಕದಿಂದಲೇ ಅಂದರೆ ದಿನಾಂಕ: 12-08-2010 ರಿಂದ ಜಾರಿಗೆ ಬಂದಿದ್ದು, ಚುನಾವಣಾ ಪ್ರಕ್ರಿಯೆಯು ಮುಕ್ತಾಯಗೊಳ್ಳುವವರೆಗೆ ಅಂದರೆ ದಿನಾಂಕ: 29-09-2010 ವರೆಗೆ ಜಾರಿಯಲ್ಲಿರುತ್ತದೆ. ಜಿಲ್ಲಾಧಿಕಾರಿಗಳು ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ನೋಡಿಕೊಳ್ಳತಕ್ಕದ್ದು.

ಆದೇಶಾನುಸಾರ
**ಅಧೀನ ಕಾರ್ಯದರ್ಶಿ**
ರಾಜ್ಯ ಚುನಾವಣಾ ಆಯೋಗ
ಕರ್ನಾಟಕ

**ನಂ.ರಾಚುಆ.224.ಇಯುಬಿ.2010 ದಿನಾಂಕ: 12–08–2010 ರ ಅನುಬಂಧ**

**ವಿವಿಧ ಕಾರಣಗಳಿಂದ ತೆರವಾದ ಸದಸ್ಯ ಸ್ಥಾನಗಳ ವಿವರ**

| ಕ್ರ. ಸಂ | ಜಿಲ್ಲೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | | ವಾರ್ಡ್ ಸಂಖ್ಯೆ |
|---|---|---|---|---|
| 1 | 2 | 3 | | 4 |
| 1 | ಬಳ್ಳಾರಿ | ಮಹಾನಗರ ಪಾಲಿಕೆ | ಬಳ್ಳಾರಿ | 19 |
| | | ಮಹಾನಗರ ಪಾಲಿಕೆ | ಬಳ್ಳಾರಿ | 1 |
| | | ಪುರಸಭೆ | ಸಿರಗುಪ್ಪ | 15 |
| | | ಪುರಸಭೆ | ಸಿರಗುಪ್ಪ | 23 |
| 2 | ಬೆಳಗಾವಿ | ಪುರಸಭೆ | ಸಂಕೇಶ್ವರ | 18 |
| | | ಪುರಸಭೆ | ಅಥಣಿ | 16 |
| | | ಪುರಸಭೆ | ರಾಮದುರ್ಗ | 17 |
| | | ಪಟ್ಟಣ ಪಂಚಾಯತಿ | ಕುಡಚಿ | 20 |
| 3 | ಗದಗ | ಪುರಸಭೆ | ಲಕ್ಷ್ಮೇಶ್ವರ | 18 |
| | | ಪುರಸಭೆ | ಲಕ್ಷ್ಮೇಶ್ವರ | 9 |

| | | | | |
|---|---|---|---|---|
| | | ಪುರಸಭೆ | ಮುಂಡರಗಿ | 21 |
| | | ಪುರಸಭೆ | ಮುಂಡರಗಿ | 4 |
| | | ಪುರಸಭೆ | ಗಜೇಂದ್ರಗಡ | 11 |
| 4 | ಬಾಗಲಕೋಟೆ | ಪುರಸಭೆ | ಮಹಾಲಿಂಗಪುರ | 19 |
| | | ಪುರಸಭೆ | ತೇರದಾಳ | 5 |
| 5 | ಕೊಪ್ಪಳ | ನಗರಸಭೆ | ಕೊಪ್ಪಳ | 2 |
| | | ನಗರಸಭೆ | ಕೊಪ್ಪಳ | 24 |
| 6 | ಹಾವೇರಿ | ನಗರಸಭೆ | ರಾಣೆಬೆನ್ನೂರು | 21 |
| 7 | ಉತ್ತರ ಕನ್ನಡ | ನಗರಸಭೆ | ಕಾರವಾರ | 25 |
| 8 | ಕೋಲಾರ | ಪುರಸಭೆ | ಮುಳಬಾಗಿಲು | 13 |
| | | ಪುರಸಭೆ | ಮಾಲೂರು | 17 |
| 9 | ಚಿತ್ರದುರ್ಗ | ಪಟ್ಟಣ ಪಂಚಾಯತಿ | ಮೊಳಕಾಲ್ಮೂರು | 6 |
| 10 | ತುಮಕೂರು | ನಗರಸಭೆ | ತುಮಕೂರು | 30 |
| | | ಪುರಸಭೆ | ಮಧುಗಿರಿ | 10 |
| 11 | ಧಾರವಾಡ | ಪುರಸಭೆ | ನವಲಗುಂದ | 20 |
| 12 | ರಾಯಚೂರು | ನಗರಸಭೆ | ಸಿಂಧನೂರು | 28 |
| 13 | ಬೀದರ್ | ಪುರಸಭೆ | ಚಿಟಗುಪ್ಪ | 22 |

**ಅಧೀನ ಕಾರ್ಯದರ್ಶಿ**
ರಾಜ್ಯ ಚುನಾವಣಾ ಆಯೋಗ, ಕರ್ನಾಟಕ


# ವಿಶೇಷ ಪತ್ರಿಕೆ

| ಭಾಗ – IV | ಬೆಂಗಳೂರು, ಮಂಗಳವಾರ, ಆಗಸ್ಟ್ ೧೭, ೨೦೧೦ (ಶ್ರಾವಣ ೨೬, ಶಕ ವರ್ಷ ೧೯೩೨) | ನಂ. ೯೨೭ |
|---|---|---|


**ELECTION COMMISSION OF INDIA**
**Nirvachan Sadan, Ashoka Road, New Delhi-110001**

Dated: 17th August, 2010
26 Sravana, 1932 (Saka)

**NOTIFICATION**

No.434/KT/2010 (3): In exercise of powers conferred by section 21 of the Representation of the People Act, 1951 (43 of 1951), the Election Commission hereby directs that the following further amendments shall be made in its Notification No.434/KT/2008(3) dated 26th March, 2008, as amended from time to time, relating to the appointment of Returning Officer for Assembly Constituencies in the state of Karnataka namely;

In column (2) of the Table appended to the said notification, against item no.44-Gulbarga Dakshin, for the existing entry, the entry 'Project Director, DRDA, Zilla Panchayat, Gulbarga' shall be substituted.

By order,
**R.K. SRIVASTAVA**
SECRETARY
ELECTION COMMISSION OF INDIA

**ವಿಶೇಷ ಪತ್ರಿಕೆ**

| | | |
|---|---|---|
| ಭಾಗ – **IV** | ಬೆಂಗಳೂರು, ಮಂಗಳವಾರ, ಆಗಸ್ಟ್ ೧೭, ೨೦೧೦ (ಶ್ರಾವಣ ೨೬, ಶಕ ವರ್ಷ ೧೯೩೨) | ನಂ. ೯೨೮ |


**ELECTION COMMISSION OF INDIA**
**Nirvachan Sadan, Ashoka Road, New Delhi-110001**

Dated: 17th August, 2010
26 Sravana, 1932 (Saka)

**NOTIFICATION**

No. 434/KT/2010 (4): In exercise of powers conferred by section 22 of the Representation of the People Act, 1951 (43 of 1951), the Election Commission hereby directs that the following further amendments shall be made in its Notification No. 434/KT/2008(4) dated 26th March, 2008, as amended from time to time, relating to the appointment of Assistant Returning Officer for Assembly Constituencies in the state of Karnataka namely;

In column (2) of the Table appended to the said notification, against item No.44-Gulbarga Dakshin, for the existing entry at serial No.1, the entry '1 Assistant Executive Engineer, City Corporation, Gulbarga' shall be substituted.

By order,

**R.K. SRIVASTAVA**
SECRETARY
ELECTION COMMISSION OF INDIA


**ವಿಶೇಷ ಪತ್ರಿಕೆ**

| | | |
|---|---|---|
| ಭಾಗ – **IV** | ಬೆಂಗಳೂರು, ಬುಧವಾರ, ಆಗಸ್ಟ್ ೧೮, ೨೦೧೦ (ಶ್ರಾವಣ ೨೭, ಶಕ ವರ್ಷ ೧೯೩೨) | ನಂ. ೯೨೯ |


**ELECTION COMMISSION OF INDIA**

**Nirvachan Sadan, Ashoka Road, New Delhi-110001**

Dated: 18th August, 2010
27 Sravana, 1932 (Saka)

**NOTIFICATION**

No.100/KT-LA/1/2010:- **Whereas**, the seat of Sri Chandrashekhar Patil Revoor in the Legislative Assembly of the Karnataka State, elected from 44-Gulbarga Dakshin Assembly Constituency, has become vacant on 14.04.2010, by reason of his death; and

2. **Whereas**, a bye-election is to be held for the purpose of filling the vacancy so caused;

3. **Now, therefore**, in pursuance of sub-section (1) of Section 150, and Sections 30 and 56 of the Representation of the People Act, 1951 (43 of 1951), the Election Commission of India hereby:-

(A) **Calls upon** the said 44-Gulbarga Dakshin Assembly Constituency in the State of Karnataka to elect, before the 20.09.2010 (Monday) and in accordance with the provisions of the said Act and of the rules and orders made thereunder, a person, for the purpose for filling the said vacancy in the Legislative Assembly of the Sate; and

**(B)** **Appoints,** with respect to the said election:-

(a) the 25.8.2010 (Wednesday), as the last date for making nominations;

(b) the 26.8.2010 (Thursday), as the date for the scrutiny of nominations;

(c) the 28.8.2010 (Saturday), as the last date for the withdrawl of candidatures;

(d) the 13.9.2010 (Monday), as the date, on which a poll shall, if necessary, be taken;

(e) the 20.9.2010 (Monday), as the date before which the election shall be completed, and

**(C)** **Fixes the hours from 7.00 A.M. to 5.00 P.M.,** as the hours during which the poll shall, if necessary, be taken on the date specified above for the election.

By order,

**R.K. SRIVASTAVA**
Secretary
Election Commission of India


# ವಿಶೇಷ ಪತ್ರಿಕೆ

| ಭಾಗ – **IV** | ಬೆಂಗಳೂರು, ಬುಧವಾರ, ಆಗಸ್ಟ್ ೧೮, ೨೦೧೦ (ಶ್ರಾವಣ ೨೭, ಶಕ ವರ್ಷ ೧೯೩೨) | ನಂ. ೯೩೦ |
|---|---|---|


**ELECTION COMMISSION OF INDIA**

**Nirvachan Sadan, Ashoka Road, New Delhi-110001**

Dated: 18th August, 2010
27 Sravana, 1932 (Saka)

**NOTIFICATION**

No.100/KT-LA/2/2010:- **Whereas**, the seat of Sri K.M. Krishnamurthy in the Legislative Assembly of the Karnataka State, elected from 127-Kadur Assembly Constituency, has become vacant on 17.07.2010, by reason of his death; and

2. **Whereas**, a bye-election is to be held for the purpose of filling the vacancy so caused;

3. **Now, therefore**, in pursuance of sub-section (1) of Section 150, and Sections 30 and 56 of the Representation of the People Act, 1951 (43 of 1951), the Election Commission of India hereby:-

(A) **Calls upon** the said 127-Kadur Assembly Constituency in the State of Karnataka to elect, before the 20.09.2010 (Monday) and in accordance with the provisions of the said Act and of the rules and orders made there under, a person, for the purpose for filling the said vacancy in the Legislative Assembly of the Sate; and

**(B)** **Appoints,** with respect to the said election:-

(a) the 25.8.2010 (Wednesday), as the last date for making nominations;

(b) the 26.8.2010 (Thursday), as the date for the scrutiny of nominations;

(c) the 28.8.2010 (Saturday), as the last date for the withdrawal of candidatures;

(d) the 13.9.2010 (Monday), as the date, on which a poll shall, if necessary, be taken;

(e) the 20.9.2010 (Monday), as the date before which the election shall be completed, and

**(C) Fixes the hours from 7.00 A.M. to 5.00 P.M.,** as the hours during which the poll shall, if necessary, be taken on the date specified above for the election.

By order,

**R.K. SRIVASTAVA**
Secretary
Election Commission of India

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಆಗಸ್ಟ್ ೧೮, ೨೦೧೦ (ಶ್ರಾವಣ ೨೭, ಶಕ ವರ್ಷ ೧೯೩೨) | ನಂ. ೬೩೧ |
|---|---|---|

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 70 ಸೇಲೋಸೇ 2009, ಬೆಂಗಳೂರು, ದಿನಾಂಕ: 17ನೇ ಆಗಸ್ಟ್, 2010**

ಕರ್ನಾಟಕ ರಾಜ್ಯಪಾಲನಾದ ನಾನು, ಹೆಚ್.ಆರ್.ಭಾರದ್ವಾಜ್, ಭಾರತ ಸಂವಿಧಾನದ ಅನುಚ್ಛೇದ 316ರ ಖಂಡ (1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಡಾ॥ ಎಂ.ಮಹದೇವ (ಮಾದಯ್ಯ ಮಹದೇವ) ಇವರನ್ನು ದಿನಾಂಕ: 10.12.2009 ರಂದು ನಿವೃತ್ತಿ ಹೊಂದಿದ ಶ್ರೀ ದಾಸಯ್ಯನವರ ಸ್ಥಾನದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರನ್ನಾಗಿ ನೇಮಿಸಿರುತ್ತೇನೆ.

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಶ್ರೀನಿವಾಸನ್**
ಸರ್ಕಾರದ ಅಪರ ಕಾರ್ಯದರ್ಶಿ (ಪ್ರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 70 SSC 2009, Bangalore, dated: $17^{th}$ August, 2010**

In exercise of the powers conferred by clause (1) of Article 316 of the Constitution of India, I, H.R.Bhardwaj, Governor of Karnataka, hereby appoint Dr. Mahadeva (Madaiah Mahadeva) as Member, Karnataka Public Service Commission in place of Sri Dasaiah retired on 10.12.2009.

**GOVERNOR OF KARNATAKA**

By Order and in the name of the Governor of Karnataka,

**L.SREENIVASAN**
Additional Secretary to Government (I/C)
Department of Personnel and Administrative Reforms
(Service Rules)

**ವಿಶೇಷ ಪತ್ರಿಕೆ**

| ಭಾಗ – I | ಬೆಂಗಳೂರು, ಬುಧವಾರ, ಆಗಸ್ಟ್ ೧೮, ೨೦೧೦ (ಶ್ರಾವಣ ೨೭, ಶಕ ವರ್ಷ ೧೯೩೨) | ನಂ. ೯೩೨ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:–** ಅನಧಿಕೃತ ಗಣಿಗಾರಿಕೆಯನ್ನು ತಡೆಗಟ್ಟಲು ವಿಶೇಷ ಕೋಶವನ್ನು ರಚಿಸುವ ಕುರಿತು.

**ಓದಲಾಗಿದೆ:–** ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಅರೆಸರ್ಕಾರೀ ಪತ್ರ ಸಂಖ್ಯೆ:ಗಭೂಇ.ಆ.ಶಾ.2010–11:2865 ದಿನಾಂಕ:03.08.2010.

**ಪ್ರಸ್ತಾವನೆ:**

ರಾಜ್ಯದಲ್ಲಿ ಕಳೆದ ಹಲವಾರು ವರ್ಷಗಳಿಂದ ಅಧಿಕೃತವಾಗಿ ಉತ್ಪಾದನೆ ಮಾಡಲಾದ ಕಬ್ಬಿಣದ ಅದಿರಿನ ಪ್ರಮಾಣ, ಸ್ಥಳೀಯವಾಗಿ ಉಪಯೋಗಿಸಿರುವ ಕಬ್ಬಿಣದ ಅದಿರಿನ ಪ್ರಮಾಣ ಮತ್ತು ರಫ್ತಾಗಿರುವ ಕಬ್ಬಿಣದ ಅದಿರಿನ ಪ್ರಮಾಣವನ್ನು ತಾಳೆ ಮಾಡಿ ಪರಿಗಣಿಸಿದಲ್ಲಿ, ರಾಜ್ಯದಲ್ಲಿ ರಫ್ತು ಮಾಡಲು ಅನುಮತಿಸಿದ ಪ್ರಮಾಣಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ರಾಜ್ಯದಿಂದ ಪರರಾಷ್ಟ್ರಗಳಿಗೆ ಕಬ್ಬಿಣದ ಅದಿರು ರಫ್ತಾಗಿರುವುದು ಹಾಗೂ ರಫ್ತಾಗಿರುವ ಕಬ್ಬಿಣದ ಅದಿರು ಮತ್ತು ಸ್ಥಳೀಯವಾಗಿ ಉಪಯೋಗಿಸಿರುವ ಕಬ್ಬಿಣದ ಅದಿರು, ಅಧಿಕೃತವಾಗಿ ಉತ್ಪಾದನೆಯಾದ ಕಬ್ಬಿಣದ ಅದಿರಿನ ಪ್ರಮಾಣಕ್ಕಿಂತ ಬಹಳಷ್ಟು ಹೆಚ್ಚಾಗಿರುವ ವಿಷಯವು ಸರ್ಕಾರದ ಗಮನಕ್ಕೆ ಬಂದಿದ್ದು, ಈ ನಿಟ್ಟಿನಲ್ಲಿ ಕಬ್ಬಿಣದ ಅದಿರಿನ ಅನಧಿಕೃತ ಗಣಿಗಾರಿಕೆ ಮತ್ತು ಸಾಗಾಣಿಕೆಯನ್ನು ತಡೆಗಟ್ಟಲು ಇಲಾಖೆಯು ಇನ್ನೂ ತೆಗೆದುಕೊಳ್ಳಬೇಕಾದ ಪರಿಣಾಮಕಾರಿ ಕ್ರಮಗಳ ಬಗ್ಗೆ ಹಾಗೂ ಪರವಾನಿಗೆ ನೀಡುವಲ್ಲಿ ಹೊಸ ವ್ಯವಸ್ಥೆಯ ರೂಪುರೇಷೆಗಳನ್ನು ಸಿದ್ಧಪಡಿಸುವ ಅವಶ್ಯಕತೆ ಇರುತ್ತದೆ.

ರಾಜ್ಯದಲ್ಲಿ ಉತ್ಪಾದನೆಯಾಗುತ್ತಿರುವ ಕಬ್ಬಿಣದ ಅದಿರಿನ ಪ್ರಮಾಣ, ಇದರಲ್ಲಿ ಸ್ಥಳೀಯ ಕೈಗಾರಿಕೆಗಳಿಗೆ ಮೌಲ್ಯವರ್ಧನೆಗಾಗಿ ಉಪಯೋಗಿಸುತ್ತಿರುವ ಪ್ರಮಾಣ ಹಾಗೂ ಹೊರರಾಷ್ಟ್ರಗಳಿಗೆ ರಫ್ತಾಗುತ್ತಿರುವ ಕಬ್ಬಿಣದ ಅದಿರಿನ ಪ್ರಮಾಣಗಳ ಬಗ್ಗೆ ಹಾಗೂ ಕಬ್ಬಿಣದ ಅದಿರನ್ನು ರಫ್ತು ಮಾಡುತ್ತಿರುವ ಸಂಸ್ಥೆಗಳಿಗೆ ಯಾವ ಯಾವ ಗುತ್ತಿಗೆದಾರರು ಕಬ್ಬಿಣದ ಅದಿರನ್ನು ಸರಬರಾಜು ಮಾಡುತ್ತಿರುತ್ತಾರೆ ಎಂಬ ಬಗ್ಗೆಯೂ ಸಹ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿ, ಕೂಲಂಕಷವಾಗಿ ಪುನರ್ ಪರಿಶೀಲಿಸಿ, ಅಗತ್ಯವಾದ ಸುಧಾರಣಾ ಕ್ರಮಗಳನ್ನು ಕೈಗೊಳ್ಳುವ ಉದ್ದೇಶದಿಂದ ಹಾಗೂ ಅನಧಿಕೃತ ಗಣಿಗಾರಿಕೆ ಮತ್ತು ಸಾಗಾಣಿಕೆಯನ್ನು ತಡೆಗಟ್ಟಲು, ಚೆಕ್‌ಪೋಸ್ಟ್‌ಗಳು:ತನಿಖಾ ಠಾಣೆಗಳ ಕಾರ್ಯವೈಖರಿಯ ಬಗ್ಗೆ ಪರಿಶೀಲಿಸಲು, ಇತ್ಯಾದಿ ಅಗತ್ಯ ಕ್ರಮಗಳನ್ನು ಕೈಗೊಳ್ಳುವ ದೃಷ್ಠಿಯಿಂದ ದಿನಾಂಕ:05.05.2010ರಂದು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ Coordination-cum- Empowered Committee ಸಭೆಯಲ್ಲಿ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಇತರೆ ಸಂಬಂಧಪಟ್ಟ ಇಲಾಖೆಯ ಹಿರಿಯ ಅಧಿಕಾರಿಗಳನ್ನೊಳಗೊಂಡಂತೆ ವಿಶೇಷ ಕೋಶವನ್ನು ರಚಿಸಲು ತೀರ್ಮಾನಿಸಲಾಗಿರುತ್ತದೆ.

ವಿಶೇಷ ಕೋಶವು ಸಮರ್ಪಕವಾಗಿ ಕೆಲಸ ನಿರ್ವಹಿಸಬೇಕಾಗಿದ್ದಲ್ಲಿ, ಅರಣ್ಯ, ಪೋಲೀಸ್, ಕಂದಾಯ, ಸಾರಿಗೆ ಮತ್ತು ಗಣಿ ಮತ್ತು ಭೂವಿಜ್ಞಾನ ಇಲಾಖೆ ಹಾಗೂ ಐ.ಬಿ.ಎಂ., ಮತ್ತಿತರೆ ಸಂಸ್ಥೆಯ ಅಧಿಕಾರಿಗಳನ್ನೊಳಗೊಂಡಂತೆ ವಿಶೇಷ ಕೋಶವನ್ನು ರಚಿಸುವಂತೆ, ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಕೋರಿರುತ್ತಾರೆ.

ಅನಧಿಕೃತ ಗಣಿಗಾರಿಕೆ:ಸಾಗಾಣಿಕೆಯನ್ನು ತಡೆಗಟ್ಟಲು ಹಾಗೂ ಇತ್ಯಾದಿ ಅಗತ್ಯ ಕ್ರಮಗಳನ್ನು ಕೈಗೊಳ್ಳಲು, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ವಿಶೇಷ ಕೋಶವನ್ನು ರಚಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ, ಈ ಕೆಳಕಂಡ ಆದೇಶ:–

